# ಆಶಾದೀಪ

(ಕವನ ಸಂಕಲನ)



ಲೇಖಕರು:—

ಕವಿರಾಜ, ಹುಯಿಲಗೋಳ ಎಚ್. ಎಸ್.

ಹಳೇಹುಬ್ಬಳ್ಳಿ

# ಆಶಾದೀಪ

(ಕವನ ಸಂಕಲನ)








ಲೇಖಕರು :—
ಕವಿರಾಜ, ಹುಯಿಲಗೋಳ ಎಚ್. ಎಸ್.
ಹಳೇಹುಬ್ಬಳ್ಳಿ.



(ಮೊದಲ ಮುದ್ರಣ)
೧೦೦೦ ಪ್ರತಿಗಳು

[ಜುಲೈ ೧೯೫೪] [ಬೆಲೆ ೦-೨-೦

ಪ್ರಕಾಶಕರು :—

ಎಚ್. ಎಸ್. ಹುಯಿಲಗೋಳ
ಪ್ರಕಾಶ ಮಂದಿರ
ಅಕ್ಕಸಾಲರಗಲ್ಲಿ, ಹಳೇಹುಬ್ಬಳ್ಳಿ







ಮುದ್ರಕರು :—

ಎಸ್. ಎಸ್. ಕಾರಂತ
ಆಶಾ ಪ್ರೆಸ್, ರಾಧಾಕೃಷ್ಣಗಲ್ಲಿ, ಹುಬ್ಬಳ್ಳಿ

# ಪ್ರಕಾಶಕರ ಮುನ್ನುಡಿ

ನಾವು ಪ್ರಕಟಿಸಿದ ಪ್ರಥಮ ಕಾವ್ಯ ಪುಸ್ತಕವೆಂದರೆ ಗಿಳಿ ಮತ್ತು ಇತರ ಕವನಗಳು. ಈ ಕಾವ್ಯ ಸಂಗ್ರಹ ಪ್ರಕಟವಾಗಿ ೧॥ ವರ್ಷ ತುಂಬುದರೊಳಗೆ ನಮ್ಮ ವಾಚಕರಿಗೆ ಈಗ ನಾವು ಪ್ರಕಟಿಸಿದ ಎರಡನೇ ಕಾವ್ಯ ಸಂಗ್ರಹವಾದ 'ಆಕಾಶದೀಪ' ವನ್ನು ಸಲ್ಲಿಸುವ ಸುವರ್ಣ ಸಮಯ ಒದಗಿ ಬಂದದ್ದಕ್ಕಾಗಿ ನಮಗೆ ಬಹಳೇ ಸಮಾಧಾನವೆನಿಸುತ್ತದೆ. ಇದರಲ್ಲಿಯು ಕವಿತೆಗಳನ್ನು ಭಾವಗೀತೆಗಳನ್ನು ಹಾಡುವ ಸಂಗೀತಗಾರರಿಗೆ ಹಾಡಬೇಕೆಂಬ ಮನದ ಇಚ್ಛೆ ಆತುರತೆ ಹೆಚ್ಚಿದಲ್ಲಿ ನಮಗೇ ಅವರು ಪತ್ರ ಮುಖಾಂತರ ಅಭಿಪ್ರಾಯ ತಿಳಿಸಿದರೆ ನಮ್ಮನವ ಎಳ್ಗೆ ಪ್ರಕಾಶಮಂದಿರಕ್ಕೆ ಪ್ರೋತ್ಸಾಹನವಿತ್ತಂತೆ ಆಗುತ್ತದೆ. ಬೆಳಗಿ ಬಾಳಿ ಹೋಳಿದಷ್ಟು ನಮ್ಮ ಪ್ರಕಾಶ ಮಂದಿರ ಬಹು ದೂರ ಜನರ ಆಶೆಗಳನ್ನು ಇಚ್ಛಿಸುತ್ತದೆ ಎಂದು ಸ್ಪಷ್ಟವಾಗಿ ಹೇಳಬಲ್ಲೆವು.

ಕಲೆಗೆ ಕೊಲೆಯಿಲ್ಲ ಎಂಬ ಸತ್ಯವಾಣಿ ಬೇಕಾದರೆ ಧೈರ್ಯ ಉತ್ಸಾಹವಲ್ಲದೆ ಉನ್ನತ ಕಲಾ ಪ್ರೇಮಿಗಳ ಸೌಹಾರ್ದ ವರ್ಚಸ್ಸ ನಮ್ಮಲ್ಲಿ ಹರಿದು ಬಂದಲ್ಲಿ ನಾವು ಹೂಡಿದ ಸಾಧನಕ್ಕೆ ಹೆಮ್ಮೆ ತಟ್ಟಲು ಸದಾವಕಾಶ ದೊರೆವುದು.

ನಮ್ಮ ಆಕಾಶದೀಪ ಪದ್ಯ ಸಂಗ್ರಹವನ್ನು ಕೇವಲ ವಾಚಕರೂ ಶಾಲೆ ಕಾಲೇಜ ವಿದ್ಯಾರ್ಥಿಗಳು ಕೊಂಡು ಕೊಳ್ಳಲಿ ಎಂಬ ಆಶೆ ಇದ್ದರೂ ಇನ್ನಿತರ ಗದ್ಯ ಪದ್ಯ ಲೇಖಕರು ಕವಿತ್ರೀಯರು ಹೊಸ ಹಳೇ ಪ್ರಕಾಶನ ಸಮಿತಿಗಳು ಜರೂರ ಒಂದೊಂದು ಪ್ರತಿ ಸಂಗ್ರಹಿಸಬೇಕೆಂದು ಹೇಳುವದು ಉಚಿತವಾದದ್ದು:

ವಾಚಕರು ಕಥಾ ಸಂಕಲನ ಕಾದಂಬರಿ ಹರಟೆ ಚರಿತ್ರೆ ಓದುವಕ್ಕಿಂತಲೂ ನಮ್ಮ ಕರ್ನಾಟಕ ಅಮರ ಸಂಗೀತ ಕಲಾ

ವನ್ನು ಸ್ಥಿರಗೊಳಿಸಲು ಇಂಥ ಪದ್ಯ ಪುಸ್ತಕಗಳು ಅವಶ್ಯ ವೆಂದು ಓದುಗರು ಮನಗಂಡಲ್ಲಿ ಆ ಬಗ್ಗೆ ಪದ್ಯ ಲೇಖಕರೇ ಕೃತಜ್ಞತಾರ್ಹವಾಗುವದಲ್ಲಿ ಸಂದೇಹವಿಲ್ಲ.

ಕೊನೆಯದಾಗಿ ನಮ್ಮ ಆಶಾದೀಪ ಪದ್ಯ ಪುಸ್ತಕದಲ್ಲಿ vii & viii ಇಟ್ಟಿರುವ ತಿದ್ದುಪಡಿ ವಿಭಾಗದ ಎಲ್ಲ ಜವಾಬ್ದಾರಿ ಪ್ರಕಾಶಕರದೇ ಆಗಿದ್ದು ಮುದ್ರಣ ದೋಷಗಳ ಬಗ್ಗೆ ಹುಬ್ಬಳ್ಳಿ ಆಶಾ ಪ್ರೆಸ್ಸಿನವರಿಗೆ ನಾವು ನಿಷ್ಕಾಳಜಿತನವನ್ನು ಹೊರಿಸುವದಿಲ್ಲ. ಮತ್ತು ಆ ಬಗ್ಗೆ ಅವರಿಗೆ ಪ್ರಕಾಶಕರ ಸಪ್ರೇಮ ವಂದನೆಗಳು.

ವಿಶ್ವಾಸ ಪಾತ್ರ

ಎಚ್. ಎಸ್. ಹುಯಿಲಗೋಳ,
ಪ್ರಕಾಶ ಮಂದಿರ ಅಕ್ಕಸಾಲರಗಲ್ಲಿ, ಹಳೇಹುಬ್ಬಳ್ಳಿ.



# ಅರ್ಪಣೆ

ಈ ಸುದೀರ್ಘ ಕಾವ್ಯ ಪುಸ್ತಕವನ್ನು ನನ್ನ ಮಾತೋಶ್ರೀ ಗಂಗಾಬಾಯಿಯವರಿಗೇ ಸ್ವಯಂ ಪ್ರೀತಿಯ ಮನಸ್ಸಿನಿಂದ ಅವರ ಕಮಲ ಚರಣ ಸನ್ನಿಧಿಗೇ ಅರ್ಪಿಸಿದ್ದೇನೆ.

ಜುಲೈ ೧೯೫೪

ಕವಿರಾಜ, ಹುಯಿಲಗೋಳ
ಎಚ್. ಎಸ್.



# — ಕವನಗಳ ಪರಿವಿಡಿ —

# ತಿದ್ದುಪಡಿ

| ಪುಟ | ನುಡಿ | ಸಾಲು | ತಪ್ಪು | ಒಪ್ಪು |
|---|---|---|---|---|
| ೧ | ೧ | ೧ | ಹೃದಯು | ಹೃದಯು |
| ೨ | ೭ | ೩ | ಮುಂಗುವರೇ | ಮರಗುವರೆ, |
| ೨ | ೫ | ೩ | ಹೃದಯು | ಹೃದಯು |
| ೪ | ೮ | ೨ | ವಿನುಗು | ಮಿನುಗ್ಗು |
| ೪ | ೯ | ೧ | ತೇಜವ | ತೇಜಜಾ |
| ೪ | ೯ | ೩ | ಕಳುಹವ | ಕಳುಹಿದ |
| ೫ | ೧ | ೧ | ರುತಿರುವ | ಬರುತಿರುವ |
| ೫ | ೧ | ೪ | ಹರಷವನು | ಹರುಷವನ |
| ೫ | ೨ | ೩ | ಬರುತಿಹೋ | ಬರುತಿಹವೊ: |
| ೫ | ೩ | ೩ | ಹೃದಯಕೇ | ಹೃದಯಕೇ |
| ೫ | ೪ | ೨ | ಬಿರುತಲಿ | ಬೀರುತಲಿ |
| ೫ | ೪ | ೩ | ಮುತ್ತಿಹದು | ಮುತ್ತಿಹವು |
| ೭ | ೨ | ೩ | ಬೇಕಾದರೆ | ಬೇಕಾದ |
| ೭ | ೩ | ೩ | ಹೊತ್ತ | ಹೊತ್ತು |
| ೮ | ೭ | ೧ | ಮೂಡಿತಿರುವ | ಮೂಡಿರುವಾ |
| ೯ | ೩ | ೩ | ಹಿವರೋ | ಹಿತವರೋ |
| ೯ | ೩ | ೪ | ಬತ್ತರಿಸಿ | ಬಿತ್ತರಿಸಿ |
| ೧೦ | ೧ | ೨ | ಹುದಗಿದಾ | ಹುದಿಗಿದಾ |
| ೧೩ | ೧ | ೨ | ಕವಿಯು ಹಾಡುತ | ಕವಿತೆ ಹಾಡುತ |
| ೧೩ | ೧ | ೩ | ಹೊನನಲಿ | ಹೊನಲಲಿ |
| ೧೩ | ೩ | ೨ | ಹೃದಯಾ | ಹೃದಯಾ |
| ೧೪ | ೯ | ೩ | ತನ್ನನ | ತನ್ನನ್ |
| ೧೫ | ೧೩ | ೧ | ಪಡಿಯಲೋ | ಪಡಿಯಲ್ |

| ಪುಟ | ಸುಡಿ | ಸಾಲು | ತಪ್ಪು | ಒಪ್ಪು |
|---|---|---|---|---|
| ೧೬ | (i) | (i) | ಆಕಾಶದಲಿ | ಆಕಾಶದಲಿ |
| ೧೬ | (ii) | (vi) | ಮಕ್ಕಳ | ಮಕ್ಕಳನಾ |
| ೧೬ | (iv) | (iv) | ಮಾನವಹಕ್ಕಿ | ಮೌನಹಕ್ಕಿ |
| ೧೭ | ೧ | ೬ | ಕಣಾನಯನದಿ | ಕರ್ಣನಯನದಿ |
| ೧೮ | ೬ | ೧ | ಕ್ರಮುವ | ಕರ್ಮವ |
| ೧೮ | ೬ | ೩ | ಕರದುಬರದಂತೆ | ಕರೆದುಬಂದಂತೆ |
| ೧೯ | i | iv | ನಿಲಿಸಿತಲ್ಲ | ನಿಲಿಸಿತಲ್ಲಾ |
| ೧೯ | i | vi | ಮಿರಮಿರಿನೆ | ಮಿರಮಿರನೆ |
| ೧೯ | ii | i | ಕಷ್ಟವಿಲ್ಲವು | ಕಷ್ಟವಿಲ್ಲವೋ |
| ೨೦ | v | ೩ | ದ್ಯಾನದಿರಲು | ಧ್ಯಾನದಿ ಇರಲು |
| ೨೧ | i | i | ಮಾಡೀ | ಮೂಡೀ |
| ೨೧ | ii | i | ಸೂರ್ಯನೆ | ಸುಯ್ಯನೆ |
| ೨೧ | iv | i | ಸಾಲ | ಸಾಲು |
| ೨೧ | v | ii | ತುಳಿಕಿತ್ತು | ತುಳಿಕತಿತ್ತು |
| ೨೧ | vii | i | ಬೀರಿ | ತೂರಿ |
| ೨೨ | ೩ | ೧ | ಮತಗೆಟ್ಟು | ಮತಿಗೆಟ್ಟು |
| ೨೬ | i | i | ಹೊಳ್ಳಳ್ಳಿ | ಹೊಳ್ಳೊಳ್ಳಿ |
| ೨೬ | ೧ | ೨ | ಕೇಳಿದಳ | ಕೇಳಿದಳು |
| ೨೭ | ೯ | ೩ | ಎನ್ನುತ್ತ | ಎನ್ನುತಾ |
| ೨೮ | ೧೧ | ೩ | ನಿಮ್ಮ | ನಾನಿಮ್ಮ |
| ೨೮ | ೧೪ | ೧ | ಹೇಳುವದೇತಿಕೆ | ಹೇಳುವದೇತಕೆ |
| ೨೮ | ೧೪ | ೪ | ಸುರಿಮುಳಯಾ | ಸುರಿಮುಳೆಯಾ |
| ೨೯ | ೩ | ೪ | ಲಿಹದೋ | ಲಿಹನೋ |
| ೨೯ | ೫ | ೩ | ಬಾಂದವ | ಭಾಂದವಾ |
| ೩೦ | ೩ | ೩ | ಎತಕೇ | ಏತಕೇ |
| ೩೦ | ೪ | ೨ | ಸುಡಿಸುತ | ನುಡಿಸುತ |
| ೩೦ | ೫ | ೩ | ನಾನೀಗೆ | ನಾನಿನಗೆ |

# ಆಶಾದೀಪ



ಹೃದಯ ಮಂದಿರದಲಿ
ಹುದಗಿದ ಆಶಾದೀಪ
ಹೆದರಿತೋ ಬಿರುಗಾಳಿ ಘನ ಶಬ್ದ ಕೇ ||೧||



ಮಂದದಲಿ ಉರಿಯುವದು
ಅಂದದಲಿ ಬೆಳಗುವದು
ಚೆಂದಾಗಿ ತೋರುವದು ಜನರ ನಯನದಿ ||೨||



ಆಶಾದೀಪ ಕಂಡು
ಆಶೆಯೇ ಹುಟ್ಟುವದು
ನಿಶೆಯು ಏರುವದು ಘನ ಯೋಜನೆಯಲಿ ||೩||



ದೀಪ ಬೆಳಗಿದ ಮನೆ
ಕಪ್ಪು ಬೆಳಕು ತಂದೀತೆ
ದೀಪವಿದು ಆಶೆಯಾ ಪೂರೈಸದಿರದೆ ||೪||

ತೋರುವರೆ ಕರಿಯುವರೆ
ಬರುವರೇ ತರುವರೇ
ತಿರಿಗುವರೇ ಮರಗುವರೇ ಇದಕೆ ಇನ್ನು ||೪||



ನೊಂದದಲಿ ಉರಿಯುವದು
ಒಂದೊಂದು ನಿಮಿಷದಲಿ
ಹೊಂದಿಹದು ಹೃದಯ ಆನಂದಲೀ ||೫||



ಅಕೋ ಅಶಾದೀಪ
ಆಕಾಶದಿ ತೇಲಿಹದು
ಭಕುತರ ಸದ್ಭಾವ ಭಕ್ತಿಯಲಿ ||೬||



೩

# ರವಿ



ಕವಿದ ಕತ್ತಲೆ ವಿಶ್ವ ಕಂಡು;
ರವಿಯು ಮೂಡಲಿ ಎಂದು ಮನವ್ರೋ
ತಿವಿದು ಅಳುತಿದೆ ಮತ್ತೆ ಅಳುತಿದೆ ಬಲಾ ಕಣ್ಣೀರೇನೋ ||೧||



ಓ ರವಿ ಬೆಳಗುವೆ ಎಂದು ಅಂದದಿ
ನರರು ನೋಯುತ ನಿನ್ನ ಜಪಿಸುತ
ವೀರ ದಿನಕರ ಮರೆತ ಎನ್ನುತ ಮತ್ತೆ
ಬರುವರು ಜನ ||೨||

ಇಪರಿ ದುಃಖವ ನೋಡಿ ದಿನಕರ
ತಪ್ಪು ಹೊರದಲೆ ಮತ್ತೆ ಮೂಡಿದ
ಕಪ್ಪು ನೋಡದ ತಿಳಿಯ ಬಾನಲಿ ಸುತ್ತು ಬೆಳಗಿದನೋ ||೩||



ರವಿಯು ಬೆಳಕಿದು ದಿನದ ಆರುತಿ
ಕವಿದ ಕತ್ತಲೆ ತಿಳಿಯು ಮಾಡುವ
ವಿಧಿಯ ಮೂರುತಿ ಇವನು ಬಾನ್ ಮೂರುತಿ
ತಿಳಿಯದೇನು ||೪||

ವಿಶ್ವ ತಂದೆಯು ಮಗನು ಇವನೋ
ವಿಶ್ವ ಮಲಗಿಸಿ ತೆರೆವನಿವನೋ
ಅಶ್ವ ಹೊತ್ತ್ರವ ರವಿಯು ಇವನೋ ಮೂಜಗ ಒಡೆಯನಿವ ||೫||



ರವಿಯು ಬೆಳಗಿಪ ಬೆಳಕೆ ಬೆಳಕೋ
ಅವನ ಛಾಯೆಯು ಮುಳುಗಿ ತೇಲಿತು
ಕಾವ ಹುಟ್ಟಿದ ನೆಲದಿ ಹಾ ಹಾ ಏನಿದು
ವಿಚಿತ್ರವೋ ||೬||



ಅಂತೆ ದೇವನ ಸೃಷ್ಟಿ ರಮ್ಯವು
ಇಂತ ಸೃಷ್ಟಿಗೆ ಹುಚ್ಚು ಮಾನವ
ಸಂತೆ ಎಬ್ಬಿಸಿ ತನ್ನ ಹೆಮ್ಮೆಗೇ ಮಾಡೀ ಕೆಡವ್ಯನೋ ||೭||



ಮನುಜ ಪ್ರಯತ್ನ ಎಷ್ಟು ದಿನವೋ
ಮಿನುಗು ಹೊಳೆವಾ ತಾರೆಗಳಂತೆ
ಮನಸು ಹುಮ್ಮಸ ಇರುವ ತನಕವೇ ಆಟ
ನಂತರ ಏನು ||೮||

ರವಿಯ ತೇಜವ ಮುಚ್ಚು ನೋಡುವ
ಕಾವ ವಿಜ್ಞಾನಿ ಬರುವ ನೋಡುವ
ದೇವ ಕಳುಹಿದ ರವಿ ಬೆಳಗುವ ವಿಶ್ವ ವಿಜ್ಞಾನಿ ಅಲ್ಲ ||೯||

# ಸೊಗಸಿನ ನೋಟ

ಮಲೆಯ ಹಸಿರಿನ ಮಧ್ಯದಲಿ ಜರುತಿರುವ ಹೊಂಬಿಸಿಲು
ಎಳೆಬಣ್ಣ ಕಿರಣದಲಿ ಬೆಳೆದಿಹವೊ ಬೆಳಕನೋ
ಕಳೆ ಏರಿ ನಿಂತಿರುವ ಸೌಂದರ್ಯ ಈ ಹೊಳಪು
ಬಳಿಯಲ್ಲಿ ಕರೆತಿಹದು ಹರುಷವನು ಭೋಗಿಸಲು ||೧||



ಹಾರುತಿಹ ರಮಣೀಯ ಆಕಾಶ ಪಕ್ಷಿಗಳು
ಝರಿಯಾ ಪ್ರವಾಹದಿ ಮುಳಿ ಮುಳುಗಿ ಏಳುತಿಹವು
ಗಿರಿಗಿರಿನೆ ತಿರುಗುತಲಿ ಬರುತಿಹೋ ದಡಕೆ ಮತ್ತೆ
ಸರಸದಲಿ ಓಡುತಿಹಾ ನೀರಹಕ್ಕಿ ಗುಂಪುಗಳು ||೨||



ಅಂದವಿದು ಮನಕೆಲ್ಲ ಚಂದವಿದು ದೃಶ್ಯಕೆ
ಎಂದೆಂದು ಮರೆಯದಿರು ಸೊಗಸಿನ ನೋಟವನು
ಎಂದೆಂಬ ಬಗೆಯನೋ ತಿಳಿ ಹೇಳು ಎನ್ನುತಲಿ
ನೊಂದಿದಾ ಹೃದಯಕೇ ಕೊಟ್ಟಿಹದು ಸಂತಸವ ||೩||



ಚೆಲುವೊಂದು ಅರಳಿದ ಹೂ ಝರಿಯಾ ದಂಡೆಯಲಿ
ಬಲು ರಮ್ಯ ಅರಳಿಹದು ಸುವಾಸನೆ ಬೀರುತಲಿ
ಬಲು ಹರುಷ ತುಂಬಿಗಳು ಓಡಿ ಬಂದು ಮುತ್ತಿಹದು
ಒಲುವಿನಲಿ ನಿಂತಿರುವ ಸವಿ ಕಂಪ ಹೂವುಗಳಿಗೆ ||೪||

ಸುತ್ತಲೂ ಬೆಳೆದಿಹ ಉತ್ತುಂಗ ಶಿಖರಗಳ
ಹೊತ್ತಿಹಾ ಭೂತಾಯಿ: ಬಿಟ್ಟಿಹಳು ಅದೃಶ್ಯ
ಮುತ್ತುತಾ ಹರಿದಿಹಾ ತಿಳಿನೀರ ಪ್ರವಾಹದಿ
ಪ್ರತಿಬಿಂಬ ಬೆಳೆದಿಹವು ಶಿಖರಗಳ ಶ್ರೇಣಿಯಲಿ ||೫||



ಬಗೆಬಗೆಯ ಬಣ್ಣದಲಿ ತೊಳೆ ತೊಳೆವ ಮನ ಒಲಿಪ
ಸೊಗಸಿನಾ ನೋಟವನು ಬರೆದಿಹದು ಚಿತ್ರಪಟ
ನಗ ನಗುತಾ ಕುಳಿತಿರಲು ಮಿತ್ರನಾ ಒಲುಮೆಯಿಂ
ಹೋಗುವಾ ಗಡಿಬಿಡಿಯು ಎನಗಾಯ್ತು ಈ ನೋಟದಿ ||೬||



# ಹೂವುಗಳು

ಇಳಿ ಹೊತ್ತು ಆದಾಗ
ಎಳೆ ಸೂರ್ಯ ನಡೆದಾಗ
ತಳ ತಳ ಹೊಳೆಯುವಾ ಸೊಗಸನ ನೋಡು ||೧||



ಇಕೋ ಬನ ವನ ಸಿರಿಯು
ನೂಕುವದು ಎದೆಯಲ್ಲಿ
ಬೇಕಾದರೆ ಒಸ್ತುಗಳು ನೋಡುವವು ನಮ್ಮ ||೨||



ಬಳ್ಳಿಯಾ ಬನವೆಂದು
ಎಳೆಮಲರು ಹೂವುಗಳು
ಇಳಿ ಹೊತ್ತ ಕಂಡು ಬಿಸಿ ಉಸಿರಪಡುವವು ||೩||



ಬಾ ಬಾರೆ ಚೆಲುವನಲ್ಲೆ
ಬಾರೇ ಎನ್ನ ಬಳೀ
ಕರೆತಿಹದು ಮಲ್ಲಿಗೆ ನಲ್ಲ ತನ್ನ ಬಳಿ ||೪||



ಚೆಂದದ ಸೊಗಸಿನಾ
ಸೌಂದರ್ಯ ನೋಡುತ
ಮಂದಹಾಸನಲಿಯುವವು ಹೂಬಳಗವು ||೫||



ಮೃದುವಾದ ಪಕಳಿಗಳು
ತಿದ್ದಿಹವು ಮೈತುಂಬ
ಮುದ್ದಾಗಿ ಬೆಳೆದಿರುವ ಹೂಚಲುವಿಗೆ ||೬||

ಮನದಲ್ಲಿ ಮೂಡಿತಿರುವ
ಬನಸಿರಿಯ ಹೂವುಗಳು
ಮನುಜರ ಸುಳುವಿಗೇ ಬಾಗೀಹವ್ರೋ ಏನು॥೭॥



ಹೊತ್ತು ತಾಕಡೆಹಾಯ್ತು
ಇತ್ತ ತಾ ಚಂದಿರನು
ಸುತ್ತುತಾ ಆಕಾಶ ಮಧ್ಯದಲಿ ಬಂದ ॥೮॥



ಚಂದಿರನ ದರ್ಶನಕೆ
ಅಂದದಲಿ ಹೂವುಗಳು
ಒಂದೊಮ್ಮೆ ಭಾರಿ ನೋಡಿ ನಕ್ಕವ್ರೋ ॥೯॥



ಸೊಗಸಿನಾ ಬಾಳಿದೋ
ಆಗುವದು ಕ್ಷಣ ಮಾತ್ರ
ಹೋಗುವದು ಹೊ ಜೀವ ವಿಶ್ವ ಬಲ್ಲದೇ ॥೧೦॥



ಸೆರೆ ಸಿಕ್ಕ ಹೂವುಗಳು
ಪುರಮರನೆ ಮರಗಿದವು
ಉರಿವಾ ಎದೆ ನೋವು ಚಂದ್ರನೇ ಬಲ್ಲ ॥೧೧॥



ಭೂದೇವಿ ತೊಟ್ಟಿಹ
ವೃಥ ಹೂವ ಮಾಲೇ
ಎದುರಾಯ್ತು ಮಾರುತನ ಬಡಿತಕ್ಕೇನೋ ॥೧೨॥



ಇಂತು ಅವುಗಳ ಮರಣ
ಸಂತಸವ ಕೊಡಲಿಲ್ಲ
ನಿಂತು ಅವುಗಳ ನೋಡಿ ಮರಳಿದೆವು ಮನೆಗೆ॥೧೩॥

# ದೇವ ದೇವ

ಊರಹತ್ತಿ ನಾ ನಿಂತು ಸೂಕ್ಷ್ಮವಲಿ ಕಾಣುವೆನು
ದರಿದ್ರರ ಒಣಬಾಳ ಗೋಳನಾ ಏನೆಂದೋ
ತಿಂಗಳಾ ತುಂಬುತಾ ವರುಷತಾ ಬಂದಿರಲು
ಅಂಗಳಾ ಮನೆಮುಟ್ಲೀ ರಂಗೋಲಿ ತೀಡಿದರು ||೧||

*

ಬಡವರಾ ಸೊಗಸನ್ನು ಕಾಣುವೆವು ಕಣ್ಣಿನಲಿ
ಮೂಡಿ ಬರುವ ದಿನಕರನ ಕೋಪವನು ಕಾಣ್ವಂತೆ
ಧನವಂತ ಪಡುವನೋ ಸುಖಗಳಾ ಕನಸನೋ
ಅನ್ನವನು ಮಾನವನು ಮನಸಿನ ಶಾಂತಿಗೇ ||೨||

*

ಏನದುಡೋ ಏನಂತೇ ಅದು ಎಲ್ಲ ನಸೀಬಂತೆ
ಮಾನವನ ಹೊಗಳಿಕೆಗೆ ಕ್ರಾಂತಿಯಾ ಸಂತೆಂತೆ
ನಾವೆಷ್ಟು ಹಿತವರೋ ಮಾಡುವೆವ್ರೋ ಯೋಗ್ಯವನು
ಅವನೆಲ್ಲ ಬತ್ತರಸಿ ಹೊರಬರಲು ನಾವೆಷ್ಟು ||೩||

ಶಪಿಸುವನು ಮನುಜನ್ಮ ಹೊಟ್ಟೆಗಿಲ್ಲದಾ ವೀರ
ತಾಪನನು ತೋರುವನು ನರಜನ್ಮ ಭೂಮಿಯಲಿ
ನೋಡುವನು ಇದನೆಲ್ಲ ಸಾಸಿರಾ ಕಂಣಿನಲಿ
ಮಾಡುವನು ಯೋಗ್ಯ ತೂಕ ಜನ್ಮಿಸಿದ ದೇವ ದೇವ|೪|

# ನಿರಾಶೆ ಕತ್ತಲು

ಹೇ ದೇವ ಈ ಪರಿಯು ದುಃಖವನು ಕೊಡುವೇಕೆ
ಎದೆಯಲ್ಲಿ ಹುದಗಿದಾ ದುಃಖದುರಿ ಉರಿತಿಹದು
ಬದುಕಿನಾ ಸುಖಬಾಳು ಸುಡಲೆಂದು ಕಳುಹಿದೆಯಾ
ದುಃಖದುರಿ ತಿಳಿ ನೋಡಿ ॥೧॥

ಬಾನಿನಲಿ ಮೂಡಿಹದು ಕಪ್ಪಿನಾ ಮೋಡಗಳು
ಮಿನುಗುವಾ ತಾರೆಗಳು ಅವುಗಳಾ ಸೆರೆಯಲ್ಲಿ
ಮನದೇಚ್ಛೆ ತೇಲಿಹವು ಮೂಡುವಾ ಆಶೆಗಳು
ಆಗಿಹವು ಆದರಂತೆ ॥೨॥

ಪ್ರಳಯದಾ ಅಗ್ನಿಯವು ಗಾಳಿಗೇ ಉರಿದಂತೆ
ತಳಮಳಿಸಿ ಈ ಎದೆಯು ಬೆಂದಿಹದು ಅದರಲ್ಲಿ
ತಿಳಿಯದಲೆ ಎದೆಯುರಿಯು ಮೌನದಲಿ ಬೆರೆಯಿತೋ
ನಿರಾಶೇ ಕತ್ತಲಲೀ ॥೩॥



# ಮೃಗರಾಜ ಬೇಟೆ

ಚಂದ್ರಮನ ಉದಯವನು ನಿದ್ರಿಸುತ ಕುಳಿತಿದ್ದ
ಅಂದದಲಿ ಮೃಗರಾಜ ವನಗಿರಿಯ ಮಧ್ಯದಲಿ
ಬಂದಿಹಾ ಹಸಿವನ್ನು ನೀಗಿಸಲು ಮೃಗರಾಜ
ಚಂದ್ರಮನ ಬೆಳಕಕಂಡ ॥೧॥



ಹೊತ್ತಾಯ್ತು ಎಂದನೋ ಮನದಲ್ಲೀ ಮೃಗರಾಜ
ಸುತ್ತಲಿಹ ಗಿರಿಗಳನು ಸುತ್ತುತಲಿ ಗರ್ಜನೆಯ
ಬಿತ್ತರಿಸಿ ಹೆದರಿಸೀ ವನಮೃಗವ ಕಾಡಿಸಲು
ದಿಶೆಗೆಟ್ಟು ಓಡಲನುವಾದ ॥೨॥



ಗಿರಿಗಳ, ಸರೋವರ, ಗಿಡಗಂಟೆ ತೆಗ್ಗುಗಳ
ಕೆರೆಭಾವಿ ಎಂದೆಂಬ ಅಂಜಿಕೇ ಈತನಲ್ಲಿಲ್ಲ
ಗುರಿ ಒಂದೇ ಮನಬಂದ ಹಾಗೆಯೇ ಮೃಗಗಳಾ
ಕತ್ತರಿಸಿ ತಿಂದು ಬಿಡುವಾ ॥೩॥



ಹಿಂಸದಾ ಕೃತಿಗಾಗಿ ಅಂಜಿದಾ ಪ್ರಾಣಿಗಳ
ಮಾಂಸದಾ ರುಂಡಗಳು ಮೃಗರಾಜ ಬಳಿ ಇಹವು
ಹಿಂಸದಾ ತನ್ನ ಕೃತಿಗಳಿಗೆ ನೋಡಿ ನಲಿವನು
ಮೃಗರಾಜ ಮನದಲ್ಲೀ ॥೪॥



ಮೃಗರಾಜನಿಗೆ ಮಾತ್ರ ವನಭೋಜನವಾಯ್ತು
ಮೃಗಗಳಿಗೇ ಮಾತ್ರ ಪ್ರಾಣ ಆಹುತಿ ಆಯ್ತೊ
ಜಗದಲ್ಲೀ ನಡೆವುದು ನಿತ್ಯ ಕೃತಿ ಮತ್ತೇಕೇ
ಮೃಗರಾಜ ಬೇಟೆಯಿಂ ॥೫॥

ಕೆಟ್ಟವರು ಒಂದೆಯೇ
ದೃಷ್ಟರು ಒಂದೆಯೇ
ಶಿಷ್ಟರೇ ಆಡಿದಾ ಮಾತ ನಂಬುವಾ ||೬||



ಹೊಟ್ಟೆಯಾ ಕಿಚ್ಚಿನಾ
ಪುಟ್ಟಿದಾ ಜನರಿಗೇ
ಹಿಟ್ಟು ಮುಕ್ಕಿಸಿ ಬರುವಾ ಕವಿಯು ||೭||



ಧನದಾ ಲೋಭಕೇ
ಮನಸನೋ ಮಾಡದೇ
ಕನಸನೋ ಕಟ್ಟುತ ಬರುವ ಇವನೋ ||೮||



ಮಾನವಾ ಜನ್ಮವೋ
ನಾರಕೇ ಅಂಜದೇ
ತನ್ನನ ತಾನೇ ಏರುವದೆನ್ನುವಾ ||೯||



ಹುಣ್ಣಿನಾ ನಾಯಕೇ
ಹೆಣ್ಣಿನ ಮೋಹವಾ
ಕಣ್ಣಿನಲಿ ಕಾಣಲಾರೆ ಎನ್ನುವ ಕವಿಯು ||೧೦||

ಕರೆದರೂ ಬರುವನೇ
ಬರುವದೂ ಬಿಡುವನೇ
ಶಿರಿವಂತರ ಮನಿ ಹೋಗುವ ಕವಿಯು ||೧೧||



ದೈವ ಶಕ್ತಿ ಯುಕ್ತಿಯು
ಯಾವದು ಇದೆಯೋ
ಕಾವನು ಹೇಳಲು ಬರಲಿ ಎನ್ನುವಾ ||೧೨||



ಖ್ಯಾತಿಯಾ ಪಡಿಯಲೋ
ಜ್ಯೋತಿಯಾ ಬೆಳಗಲೋ
ಪ್ರೀತಿಯಾ ಬೇಕು ಅನ್ನುವಾ ಕವಿಯು ||[illegible]||



೧೬

# ಮೌನಹಕ್ಕಿ

ಆಕಾಶದಲಿ ಹಾರುವ ಮೌನಹಕ್ಕಿಯೇ
ಸಾಕಾಯಿತೋ ಏನು ನಿನಗೋ (ಹೇ)
ಹಾರಾಡೀ ಬಾನ ಮಧ್ಯದಲಿ ನೀ
ತೋರಿದೆ ನಿನ್ನ ಸೌಂದರ್ಯ ರೆಕ್ಕೆಗಳಾ
ಸೂರ್ಯನು ಮುಳುಗುವ ಸಮಯದಿ
ಕಾರ್ಯವ ನೀ ಮುಗಿಸೀ ತಿರಿವಿ ಬಂದೆ
ಗೂಡಿಗೇ ಆದರೇನು ನಿನಗೆ ಬಿಡುವಿಲ್ಲವೇ?
ಧಡಪಡಿಸಿ ಹೋದಿ ಮಕ್ಕಳ ನೀ ಇಲ್ಲಿ ಬಿಟ್ಟು
ಉದ್ಯೋಗ ನಿನಗೇನು ಕಷ್ಟ ಹೇಳು
ಮಧ್ಯಊರಿನ ಮನೆಮಾರು ಜನಗಳಲಿ
ಸುಖಭೋಗಿ ನೀನು ಅಂತರಂಗದಲಿ
ದುಃಖವನು ಅರಿಯದೇ ಬಹಿರಂಗದಲಿ
ಹಾಡಲು ನಿನಗೇ ಬಾಯ್ ಬಂದಿತೇನು
ನುಡಿಯಲು ನಿನಗೇ ಒಂದು ಬಾರದು ಅಯ್ಯಾ
ಹಾಡಿ ಹೇಳಲು ಬಲ್ಲೆ ತಿಳಿದವರಿಗೇ ಚುಂಚಲಿ
ಸುದೈವಿ ನೀ ಮೌನವಹಕ್ಕಿ ಜನ್ಮತಾಳಿ ಪಾಪ
ದುರ್ದೈವವನು ಹೊರಲಿಲ್ಲ ಮಾತಾಡಿ ನೀನು



# ಪೂರ್ಣಿಮೆ

ಪೂರ್ಣಿಮೆಯ ಚಂದಿರನು
ವರ್ಣಗಲಿ ತೇಲಿಹನು
ಕಣನಯನದಿ ತೋರುವ ಸೌಂದರ್ಯದಿ ||೧||



ಆಷಾಢದ ಪೂರ್ಣಿಮೆಯು
ದನವನದಿ ತೀರದಲಿ
ಕಾಡಾಡಿ ಬೇಡುವದು ಶಾಂತಿ ಕನಸನ್ನು ||೨||



ಸೃಷ್ಟಿಕರ್ತನ ಸೃಷ್ಟಿ
ಶಿಷ್ಟದಿ ಒಡಮೂಡಿಹದು
ಕಷ್ಟತಾನೆ ಏನು ಪೂರ್ಣಿಮೆ ಬೆಳಕು ||೩||



ಕವಿ ಹೃದಯ ಓಟ
ಆವ ಹರುಷಲಿಹದು
ಕಾವನರನು ಹೇಳಲು ಸಾಧ್ಯ ||೪||



ನಿಜಶಾಂತಿ ನೆಲೆಸಿಹದು
ನಿಜ ಪೂರ್ಣಿಮೆ ಚಂದಿರನ
ಗಜದೂರ ವಿರುವ ಮೃಗಪಕ್ಷಿಗಳಿಗೆ ||೫||

ಕ್ರೂರ ಕ್ರಮವ ಮುಗಿಸಿ
ಮರೆತುಸಿದ್ದಹೆ ಮೃಗ
ಕರದು ಬರದಂತೆ ಬಂತು ತಟಾಕಕೆ ||೬||

ಕಾನನಕೇ ರಮ್ಯ ಪಟ್ಟಣಕೇ ಭವ್ಯ
ಮನಕೇ ಶಾಂತಿ ಜನಕೇ ಆಶ್ಚರ್ಯ
ಕನಸಾಗಿ ನೆಲೆಸಿಹದು ಪೂರ್ಣಿಮೆ ||೭||



# ಕೆರೆಯನಾರಿ



ನಮ್ಮ ನಗರ ಹೂಬಳ್ಳಿ ನಗರ
ಸುಮ್ಮನೇಕೆ ಹೊರಟು ಬಂದೇ

ತಿರುಗಿ ತಿರುಗಿ ನಗರವನ್ನೊ
ಮರೆಯಲಾದೆ ಕೆರೆಯ ದಡವ
ಹರಿವ ಕೆರೆಯ ನೀರು ನೀರು
ಕರೆದು ನನ್ನ ನಿಲಿಸಿತಲ್ಲ
ಹರಿದು ಬರುವ ತಿಳಿಯ ನೀರು
ಮಿರಮಿರಿನೆ ಮಿಂಚಿತೋ
ಕಿರಣ ಸೂರ್ಯಕೆ ಹೇಳಂತು



ಸೃಷ್ಟಿದೇವ ಕಷ್ಟವಿಲ್ಲವು
ಇಷ್ಟವಾಯಿತು ಅಂದೆ ಮನದಿ
ಹರೆಯಜೀವ ಕೆರೆಯ ಬಳಿಯಲಿ
ಸಿರಿಯದೇವತೆ ಅಂತೆಕಂಡಿತು



ಮರಳಿಬರುವ ತಿಳಿಯ ನೀರು
ಕೊರೆದು ಹೋಯ್ತು ಹೃದಯ
ತೆರೆಯಲಿ ಎಂದು ಮನದಲಿ
ಮರಗುವಲ್ಲಿ ಹರಿದುಬಂದಳು "ಕೆರೆಯನಾರಿ"

ನೆಟ್ಟ ನೋಟ ಕೆಟ್ಟ ದೃಷ್ಟಿ
ಇಟ್ಟವಾತ್ಸಲ್ಯ ಕೆಡಕುಂತೆ
ಸುಟ್ಟು ಹೋಯಿತು ಕೆರೆಯ ನಾರಿಯಾ

*

ಬಂತು ಕೆಡಗು ಎಂತ ಸಿಡಗು
ಅಂತುನಾನು ಸುಮ್ಮನಿರಲು
ಸಂತಸಂತೆ ದ್ಯಾಖದಿರಲು
ಎಂತ ಮಾಯ ಆಯಿತು ಹೇಳಲಿ

*

ತರುಣಹೃದಯ ತರುಣಿಯಲ್ಲಿ
ಕರೆದುಬಂದು ಮುತ್ತಒತ್ತಿ
ಸರಿದು ಹೋಯಿತು ಕೆರೆಯನಾರಿಯಾ

*

ತಿಳಿದುಮಾಡಿದ ಕರ್ಮಕಾರ್ಯ
ಹೊಳೆದು ಬಂತು ನಿಜದ ನೋಟದಿ
ತಿಳಿಯ ಮುಗುಳು ನಗೆಯ ತೆನೆಯಲಿ
ಕಳಸಲೆಂತು ಬೆಂದಹೃದಯಾ

*

“ನಮ್ಮ ನಗರ ಹೂಬಳ್ಳಿನಗರ
ಸುಮ್ಮನೇಕೆ ಹೊರಟುಬಂದೇ”

# ಮುಗಿಲ ಅಂಚು

ಮುಗಿಲು ಅಂಚಿಗೆ ಕೆಂಪುಬಣ್ಣ ಮೂಡೀ ಬಂದಿತ್ತು
ಹಗಲು ದೀವಿಟಿರತ್ನ ಸೂರ್ಯ ನೋಡವಂಥಿತ್ತು

ತಂಪುಗಾಳಿ ಸೂರ್ಯನೆ ಬೀಸಿಹರುಷ ತಂದಿತ್ತು
ಇಂಪುಗಾನದ ಸ್ವರದ ತೆರೆಗಳುಕರ್ಣ ತುಂಬಿತ್ತು

ಬಾಲ್ಯ ಹುಡುಗರ ವಿನ್ಯ ಆಟಬೈಲು ತುಂಬಿತ್ತು
ಕೋಲಾಹಲವು ಹುಡುಗರಲ್ಲಿ ರಮ್ಯವಾಗಿತ್ತು

ಹಕ್ಕಿಗಳ ಸಾಲ ರೇಷೆಬಾನಿನಲ್ಲಿ ರಚ್ಚವಾಗಿತ್ತು
ಕುಕ್ಕಿ ಬರುವ ಸೂರ್ಯವರ್ಣ ಕಪ್ಪು ಆಗತಿತ್ತು

ಹರೆಯದ ಹೃದಯ ಬೇಡಿಬರುವ ಆಶೀಕಮಾರಿತ್ತು
ಹರೆಇಳಿದ ಮುದಕರ ಆರೆ ತುಂಬಿ ತುಳಿಕಿತ್ತು

ಜಗದ ಆಟ ತಿಳಿಯುದೆಆಯ್ತು ನೋಡನೋಡತ
ಆಗವಮೋಸ ಆಗಿಹೋಯ್ತು ನಮ್ಮ ಆಡಳಿತ

ಮೋಸದ ಮಾತಿಗೇ ಕಾಸು ಬೀರಿ ಬದುವರು ಎಷ್ಟಂತೆ
ಕಾಸುಇಲ್ಲದೆ ಬೀಕಾರಿ ತಿರುಗುವ ಜನರು ವಿಷ್ಟಂತೆ

ಮುಗಿಲು ಅಂಚಿಗೆ ಕೆಂಪು ಬಣ್ಣ ಮೂಡೀ ಬಂದಿತ್ತು
ಹಗಲು ದೀವಿಟಿ ರತ್ನ ಸೂರ್ಯ ನೋಡುವಂಥಿತ್ತು



# ಕುಲವೆಲ್ಲಿ?

ಕುಲವೆಲ್ಲಿದೆಯೋ
ಕಲಿಯುಗ ಧರ್ಮದಲಿ
ಶಿಲೆಯಾಗಿಹೋಗಿದೆಯೆ ಮನುಜವಂಶದಲಿ ||೧||



ನೀತಿ ಬರೆಗೆಟ್ಟಿತಯ್ಯೋ
ರೀತಿ ಅಳಿಸಿತು ಧರ್ಮದಲಿ
ಯಾತಿಕೇನೆಲಿಸಿಹದು ನರಜನ್ಮವೋ ||೨||



ಬುದ್ಧಿ ಮತಗೆಟ್ಟು ಹೋಗಿ
ಇದ್ದ ಐಶ್ವರ್ಯವ ನುಂಗಿ
ಕಮ್ದಬಯಪ ಯೋಜನೆ ಕಲಿಸಿತೇ ||೩||



ಕುಲಭೇದ ಕಂಡು
ಕುಲಗೆಟ್ಟ ಕಲಿಗಳು
ಕುಲುಕುಲು ನಗುತಿಹರು ನಾಮದಲಿ ||೪||

ಜನಿಸಿದ ಮಹಾತ್ಮರು
ಮನಅಂಜದೆ ಬಂದು
ಕೊನೆಗೆ ಬಲಿಯಾಗುವರು ಹುತಾತ್ಮರಲಿ ||೫||

ವಾರಿಗಣ್ಣಿನಾ ಭಕ್ತಿಗೇ
ನರರ ನೋಯಿಸಲೇಕೆ
ಖರೆಯಾಗಿ ಶಿಲೆಯಾಗುವೆನೆಂದ ದೇವಾ ||೧||



ಕಲ್ಲು ಮೂರ್ತಿಗೆಂದು
ಹಲ್ಲನು ಕಡಿಯುತಲಿ
ಬೆಲ್ಲಿ ಭಾಗ್ಯವನು ಕಾಣ್ಬೇಕೆನ್ನುವರು. ||೨||



ಕ್ರೂರ ಕರ್ಮಗಳು ತುಂಬಿ
ಹೊರೆಯಾದ ಪಾಪಗಳನ್ನು
ಸುರಿಸುವದು ಕುಲವಿಲ್ಲದೇಶವು ||೩||



# ಸೌಂದರ್ಯ ಜಲಪಾತ

(ರಸಭರಿತ ಕಾವ್ಯ)

ಸತ್ಯವಿದು। ಸೌಂದರ್ಯ ದಾರಿಯಾ। ಬೀದಲೀ।
ಸತ್ಯದಲಿ ಮೂಡಿಹುದು। ಜೋಗವಾ। ಜಲಪಾತ।
ಕಾಡದಾ। ಗಿರಿಯಲೀ। ದಢವಢನೆ। ಹರಿಯುತಲಿ।
ಧುಡುಕುವದು। ಜಲಪಾತವಿದು ॥೧॥



ಪ್ರಯಣದಾ। ರಸಿಕರಿಗೇ। ಪ್ರಾಣದಾ। ಜ್ಯೋತಿಯೋ।
ಕಾಣದಲಿ। ಹರಿಯುವದು। ಎಲ್ಲಿಂದೋ। ಜಲಪಾತ।
ಹೊಣೆಯಿದು। ಹೊತ್ತಿಹದು। ದೇವನಾ। ಉಡಿಯಲ್ಲೀ।
ಅಂತೆಯೇ। ನಿರ್ಮಿಸಿದ। ನವ ॥೨॥



ಘನಗೋರ। ಎತ್ತರದ। ಗಿರಿಯದಾ। ಒಡಲಲ್ಲೀ।
ಕಾನನದ। ದಾರಿಯನು। ಸುತ್ತುತಾ। ಬೀಳುವದು।
ಘನಗೋರ। ಶಬ್ದವ್ರೋ। ಕಿವಿಗಳಲಿ। ತುಂಬುವದು।
ಅಪ್ಪಳಿಸಿ। ಭೂಮಿಗೆ। ಬರಲು ॥೩॥



ಸಪ್ತವರ್ಣ। ಮೂಡುವದು। ಮಧ್ಯದಾ। ಜಲದಲ್ಲೀ।
ಗುಪ್ತವಿದು। ರಾತ್ರಿಯಲಿ। ವತ್ತೀನು। ನೋಡಲ್।
ವ್ಯಾಪ್ತಿಯು। ಹರಡಿಹದು। ಲೋಕಕೇ। ಸೌಂದರ್ಯ।
ಜಲಪಾತ। ಹೃದಯವ್ರೋ ॥೪॥

ಪಂಚಹರಿ। ಹರಿಯುವವು। ಪಂಚದಿಶೇ ಗಳಲಕ್ಷ್ಮೀ।
ಹಂಚಿಹರಿ। ದೋಗುವದು। ನಾಮಗಳ। ಶಬ್ದದಲಿ.
ಹೊಂಚುವಿದು। ಹಾಕುವದು। ಮನಜನಾ। ಒಪ್ಪಿಲ್ಲಾ।
ಅಂತೆಯೇ ಇದರಲ್ಲಿಯೋ ||೫||



ನಮನನೋ। ಶರಾವತಿ। ಬರುವೆನಾಂ। ಮತ್ತೊಮ್ಮೆ।
ನಿಮಿಸುವದು। ಈಲೋಕ। ಶಾಶ್ವದಿ। ನಿನ್ನಲ್ಲೀ।
ನಮಗೇನು। ಕೊಡದರೂ। ಮೆಚ್ಚಿದೆವು। ಸೌಂದರ್ಯ।
ಶಾಶ್ವತ। ಯುಗದಿಇರುವೇ ||೬||



# ಹಳ್ಳಿಯ ಹುಡಿಗಿ

ಹಳ್ಳಿಯ ಹುಡಗೀ ಮಾಡಿದಳ ಮಾಟ
ಹೊಳ್ಳಿಳ್ಳಿ ತಿರುವುತ ಠೊಂಕದದಾಟ ||ಪಲ್ಲ||



ಸ್ವಾಗತವಾಯ್ತು ಹೋದಡನೆ
ನಗನಗುತ ಕೇಳಿದಳ ವಾರ್ತೆ
ಬೇಗನೆ ಬರುವೆನು ಮತ್ತೆನುತ
ಜಗಾದ ಕೊರತೆ ಸಮರಿಸಿ ಅಂದಳು ||೧||



ಬಂದಳು ಬೇಗ ಹಳ್ಳಿಯ ಹುಡಿಗೀ
ತಂದಳು ತಾಂಬೂಲ ತಂಬಾಕ ಚಿಂಚೀ
ಬಾಗಿಲ ತೆರೆಯುತ ಹೋದಳು ಕೋಣೆಗೇ
ಸ್ವಾಗತವೆಂದಳು ಹಾಡಹಾಡತಾ ||೨||



ಹಳ್ಳಿಯ ಹುಡಿಗೀ ಹುಂಬಿಯೆಂದನೋ
ಸುಳ್ಳು ಅನ್ನುವಿರಿ ಅಂದಳು ನಗುನಗುತ
ಯಾಕದು ನಿನ್ನ ಪ್ರೇಮಾ ಎಂದಾ
ಸಾಕು ಮಾಡು ನಿನ್ನ ವಯ್ಯಾರ ಅನ್ನಲು ||೩||



ಕೋಪಿಸಿಕೊಳ್ಳಲು ಶಹರದ ಹುಡಿಗೀ
ತಾಪವ ಮಾಡಲು ಕೇಳಿಲ್ಲ ನಾ ಹಣ
ತಪ್ಪಾದರು ಏನಾಯ್ತು ಅಂದಳು ಹುಡಿಗೀ
ಒಪ್ಪುವೆ ನಾನು ನಿಮ್ಮನ್ನ ಬಿಡಲಾರೇ ||೪||

ತಟ್ಟಿತು ಬೆವರು ಹುಟ್ಟಿತು ಹಸಿಬಿಸಿ
ಇಟ್ಟ ವಿಶ್ವಾಸ ತೊರೆಯಲೇ ಎಂದನು
ಒಟ್ಟು ಸಮಾಧಾನ ವಿಳ್ಯವಹಾಕಲು
ಕೊಟ್ಟಳು ಹಳ್ಳಿಯ ಹುಡಿಗೀ ಆತಗೇ ||೫||

ಉಬ್ಬುತ ಹಾಕಿದ ತಂಬಾಕ ಕೈಯನು ಜಾಡಿಸಿ
ಒಬ್ಬಳೇ ಮಗಳೇ ಸೊನ್ನೆಯು ಮಾಡಿದ
ನಾಚೀನಾಚೀ ಆವಳು ಮುಖ ಕೆಳಗೆ ಹಾಕೀ
ಸೂಚೀದಳು ನಗುನಗುತಲಿ ಹೂಂ ಹೂಂ ಎಂದು ||೬||



ಸಾಕುಬಿಡು ಬೇಕಾದ್ದು ಮಾಡುವೆ
ನೌಕರೀ ಒಂದು ಚನ್ನಾಗೀ ಸಿಕ್ಕರೆ
ಸಾಕುವೆ ಕುವರಿ ನಿನ್ನ ಅರಸಿಯಂತೆ
ಬೇಕಾದ್ದ ಬೇಡಲುಅನುಮತಿ ಎಂದ ||೭||



ಯಾಕೇ ಆಡುವಿರಿ ಸುಮ್ಮಸುಮ್ಮನೇ
ಬೇಕಾಗಿದೆ ನಿಮಗೇ ನಾನು ಅಲ್ಲವೆ
ಸಾಕು ಮಾಡೀ ಹಾಸಿಗೇ ಉಳಿಸುವೆ
ಬೇಕಾದಷ್ಟು ನಿದ್ರಿ ಮಾಡೀ ಅಂದಳು ||೮||



ಹೂಂ ಚೆನ್ನಾಗಿಯ್ತು ತಡಿತಡೀ
ಹಾಂ ಅಲ್ಲಲ್ಲಾ ನಿನ್ನ ಹೆಸರು ಹೇಳು ಅಂದ
ಹೋ ಎನ್ನುತ್ತ ಬೊಟ್ಟು ಕಚ್ಚಿ ನುಡಿದಳು
ಹೆದರುತ ಹಳ್ಳಿಯ ಹುಡಿಗೀ ಹೆಸರು ||೯||

ಬಲು ಮಧುರ ನಿನ್ನ ಹೆಸರು
ಒಲುವಿನಲಿ ಕೇಳಿ ಶಾಂತಿ ಹೊಂದಿದೆ
ಗೆಲುವಿನಲಿ ನನಗೆ ಭಾಗಿನಿ ಆದೀ
ಬಲು ಭುಜ ಆಯ್ತು ಮಲಗು ಅಂದ ||೧೦||

ಒಲ್ಲೆ ನಿಮ್ಮ ಹೆಸರು ಕೇಳುವೆ
ಚೆಲ್ಲಿ ತಂದು ನೀರು ಕೊಡುವೆ ನಿಮಗೇ
ಹಾಗೇನು ಹಾಗಾದರೆ ಹೇಳುವೆ ಅದರಲಿ ಏನು
ಹೇಗೆ ಹೇಳಲಿ ಅನ್ನುತ ನುಡಿದ ಹೆಸರು ||೧೧||

ಕೇಳಿ ಸಂತೋಷವಾಯ್ತು ಅಂದಳು
ಹೇಳಿ ಹೋಗುವಾಗ ನಮಿಸುವೆನೆಂದಳು
ತಿಳಿಹೇಳಿ ಮಾಡುವ ಶುಭ ಕಾರ್ಯವು
ಸುಳ್ಳು ಆದೀತೆ ನಮ್ಮ ಬಾಳಿನ ನೋಟ ||೧೨||

ಬ್ರಹ್ಮನು ಜಯಿಸಿದರೆ ಆಗುವದು ಆಗದೇನು
ಒಮ್ಮೆಲೆ ಆಗೀಹೋದರೆ ಹೆದರುವಿಯಾ
ಸುಮ್ಮನೇ ಆತುಬಿಡು ಭುಜಕೆ ಮೊದಲು
ಕಮ್ಮನೆ ತಿರ್ಪಿಸೋಣ ನಮ್ಮ ಆಶೆಮೊದಲು |೧೩|

ಕೇಳುವದೇತಿಕೆ ಚಾಚಿದಳು ಕಾಲು
ಬಾಳ ಉದ್ದ ಹಳ್ಳಿಯ ಕುವರೀ ಆದಳು
ಬೆಳವಣಿಗೇ ಮೇಲು ಸುಖಜೀವಿ
ತಿಳಿಬಿಳಿ ಗಲ್ಲಕೇ ಮುತ್ತಿನ ಸುರಿಮಳಯಾ ||೧೪||

ಮೆಚ್ಚಿದವು ಈ ದೇಹ ರಾಶಿ ವೃಂದಲಿ
ಕೆಚ್ಚೆದೆಯ ಬಿರುದು ಪಡೆದವು ಎಲ್ಲಡೇ
ಮುಚ್ಚಿತು ಮಂಗಲವಾದ್ಯ ಮನೆಯಲಿ
ಹೆಚ್ಚಿತು ಅವನ ಸೌಭಾಗ್ಯ ತೋಳಲಿ ||೧೫||

—※—

೨೯

# ದೇವಸ್ಥಾನ

ತೆರೆಯಿತು ದೇವಸ್ಥಾನದ ಬಾಗಿಲು
ಇರುವದು ಇನ್ನೂ ನಸುಕಿನ ಮುಗಿಲು
    ಊರಕೇರಿಯು ಹರಿಜನವಾಲೀ
    ಊರ ದಾರಿಯು ಬಳಿಯುತ ಬರುವನು
    ಕೆರೆಯು ಊರಿನ ದಂಡೆ ಬಳಿಯಲೀ
    ನಾರಿಯು ಮಂಡಳಿ ಹೊರಟಿಹದೋ ॥೧॥
ಸೊಗಸಿನ ನೋಟ ನಸುಕಿನ ನೋಟ
ಬಾಗಿಹದು ದೇವಸ್ಥಾನದ ಬಾಗಿಲಲೀ
ಹಿರಿಯರು ಕಿರಿಯರು ಸೆಟ್ಟಭಟ್ಟರು
ಭರಭರ ಬರುವರೋ ಬಾಗಿಲದೆಡೆಗೇ ॥೨॥
    ಬಂದಿಹ ಭಕುತಿಯ ಸಜ್ಜನ ಬಳಗ
    ತಂದಿಹರು ಸವಿ ಊಟ ಬಾಗಿಲಿಗೇ
    ದೇವಸ್ಥಾನದ ಪೂಜೆಯಾಮೂರ್ತಿಯು
    ಕಾವಭಕುತನ ನೆನಸುತಲಿಹದೋ ॥೩॥
ಢಣಢಣ ಘಂಟೆಯು ಬಾರಿಬಾರಿಸೀ
ಛಣಛಣ ಹೊಳೆಯಿತು ದೀಪಆರುತಿ
ಪೂಜಾರಿಯ ಮಂತ್ರವು ಅಡಗಿಹದು
ಗಜದೂರವಿರುವ ದೇವಸ್ಥಾನ ಶಿಖರದಿ ॥೪॥
    ಭಕ್ತಿಯ ನಿಲಯು ಶಕ್ತಿಯ ಆಲಯು
    ಯುಕ್ತಿಯ ಕೂಟ ದೇವಸ್ಥಾನವೋ
    ಕೂಡವಯುಗವು ಬಾಂದವಯೋಗವು
    ಜೋಡನೆಯಾಗುವ ದೇವಸ್ಥಾನವೋ ॥೫॥

# ಸಖಿಬಾರೆ-ಸಖೀ ಆಡೆ



ಸಖಿಬಾರೆ ಸಖಿ ಆಡೇ
ಮುಖ ನೋಡೆ ನಗುಬಾರೆ
ಸಖಿಬಾರೆ ಸಖಿಆಡೆ ಮುಖ ನೋಡೆ ||೧||



ತುಂಬಿದ ಹೃದಯ ಅರಳಿಹುದು
ತುಂಬಿ ಬಂದ ಸುಂದರ ನಯನದಿ
ತುಂಬಿ ಹರುಷದ ಗಾನವ ಹಾಡುವೆ ||೨||



ಬ್ರಹ್ಮನು ಕಳುಹಿದ ಮಾಲಿ ಹಿಡಿಯೆ
ಬ್ರಾಹ್ಮಣ ತಿಳಿಹಿದ ವೇದಿಕೆ ನೋಡೆ
ಸುಮ್ಮನೆ ನೋಡಿ ಕಾಡುವೆ ಎತಕೆ ? ||೩||



ಅಡಿಗೆ ಮಾಡುವ ಪಾಠ ಕಲಿಯುತ
ಸುಡಿವ ಕೈಗಳ ಬಾಯ್ ಸುಡಿಸುತ
ಕಡಬಿನ ಮಳೆ ಸುರಿಸುತ ಬೆನ್ನಲಿಮರಿತೆಏನು||೪||



ಹಿರಿಯರು ಹೇಳುವದು ವೇದ ನುಡಿ
ಕಿರಿಯರು ಆಡುವದು ಚಲಚಿತ್ರ ನುಡಿ
ಖರೆಯಾಗಿ ನಾನೀಗೆ ಹೇಳುವೆ ಮೌನ ನುಡಿ ||೫||

# ಆಶಾದೀಪ

( ಕವನ ಸಂಕಲನ )



ಲೇಖಕರು :—

ಕವಿರಾಜ ಎಚ್. ಎಸ್. ಹುಂಬಲಗೋಳ

ಹಳೇಹುಬ್ಬಳ್ಳಿ